## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2512
ಸದಸ್ಯರ ಹೆಸರು : ಶ್ರೀ ಗೋವಿಂದ ರಾಜು
(ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 23.03.2022.
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಗರ್ ಹುಕ್ಕುಂ ಭೂ ಅಕ್ರಮ ಸಾಗುವಳಿಯಲ್ಲಿ ಕೋಲಾರ ಜಿಲ್ಲೆಯಲ್ಲಿ ಎಷ್ಟು ರೈತರು ಭೂ ಮಂಜೂರಾತಿಗಾಗಿ ನಮೂನೆ-57 ರಲ್ಲಿ ಎಷ್ಟು ಅರ್ಜಿಗಳನ್ನು ಸಲ್ಲಿಸಿರುತ್ತಾರೆ; | ಕೋಲಾರ ಜಿಲ್ಲೆಯಲ್ಲಿ ನಮೂನೆ-57 ರಲ್ಲಿ 44,644 ಅರ್ಜಿಗಳು ಸ್ವೀಕೃತಗೊಂಡಿರುತ್ತವೆ. |
| ಆ) | ಎಷ್ಟು ರೈತರಿಗೆ ಇದುವರೆಗೂ ಭೂ ಮಂಜೂರು ಮಾಡಲಾಗಿದೆ; ಬಾಕಿ ಇರುವ ಅರ್ಜಿಗಳೆಷ್ಟು; (ಸಂಪೂರ್ಣ ವಿವರ ನೀಡುವುದು) | ನಮೂನೆ-57 ರಡಿಯಲ್ಲಿ ಸಲ್ಲಿಕೆಯಾಗಿರುವ 44,644 ಅರ್ಜಿಗಳ ಪೈಕಿ 1418 ಅರ್ಜಿಗಳು ಇತ್ಯರ್ಥಗೊಂಡಿದ್ದು, ಬಾಕಿ 43,226 ಅರ್ಜಿಗಳು ಇರುತ್ತದೆ. ಸದರಿ ಅರ್ಜಿಗಳ ಪೈಕಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ರ ಕಲಂ 94(ಎ) ರಡಿ ನಿರ್ಧಿಷ್ಟಪಡಿಸಲಾಗಿರುವ ನಗರ ಮತ್ತು ಪಟ್ಟಣ ಪ್ರದೇಶದ ನಿರ್ಬಂಧಿತ ಪ್ರದೇಶಗಳಲ್ಲಿ ಸಲ್ಲಿಕೆಯಾಗಿರುವ ಅರ್ಜಿಗಳನ್ನು ತಿರಸ್ಕೃತಗೊಳಿಸಿ, ಅರ್ಹ ಅರ್ಜಿಗಳನ್ನು ಬಗರ್ ಹುಕ್ಕುಂ ಸಾಗುವಳಿ ಸಕ್ರಮೀಕರಣ ಸಮಿತಿಯ ಮೂಲಕ ಇತ್ಯರ್ಥಗೊಳಿಸಲು ಕ್ರಮವಹಿಸಲಾಗುತ್ತಿದೆ. |
| ಇ) | ಬಾಕಿ ಇರುವ ಅರ್ಜಿಗಳಿಗೆ ಭೂ ಮಂಜೂರು ಮಾಡದಿರಲು ಕಾರಣಗಳೇನು? | |
| ಈ) | ಭೂ ಮಂಜೂರು ಮಾಡಿರುವ ಎಲ್ಲ ಆ ರೈತರುಗಳಿಗೆ ಸಾಗುವಳೀ ಚೀಟಿಯನ್ನು ನೀಡಲಾಗಿದೆಯೇ; | ಕೋಲಾರ ಜಿಲ್ಲೆಯಲ್ಲಿ ನಮೂನೆ-57 ರಡಿ ಸಲ್ಲಿಕೆಯಾಗಿರುವ ಅರ್ಜಿಗಳಿಗೆ ಈವರೆಗೆ ಯಾವುದೇ ಜಮೀನು ಮಂಜೂರು ಮಾಡಿ ಸಾಗುವಳಿ ಚೀಟಿಗಳನ್ನು ವಿತರಿಸಲಾಗಿರುವುದಿಲ್ಲ. |
| ಉ) | ನೀಡದಿದ್ದಲ್ಲಿ, ವಿಳಂಬಕ್ಕೆ ಕಾರಣಗಳೇನು? | ಕೋಲಾರ ಜಿಲ್ಲಾ ವ್ಯಾಪ್ತಿಯ ವಿಧಾನಸಭಾ ಕ್ಷೇತ್ರಗಳಿಗೆ ಬಗರ್ ಹುಕ್ಕುಂ ಸಮಿತಿಗಳನ್ನು ರಚಿಸಲಾಗಿದ್ದು, ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ 02 ಎಲ್‌ಜಿಪಿ 2021, ದಿನಾಂಕ:24.02.2022 ರಲ್ಲಿ ನಿರ್ದೇಶಿಸಿರುವಂತೆ ಕರ್ನಾಟಕ ಭೂ ಕಂದಾಯ ನಿಯಮಗಳು, 1966 ನಿಯಮ 97(1) ರಂತೆ ಪ್ರತಿ ಗ್ರಾಮದಲ್ಲಿ 100 ಜಾನುವಾರುಗಳಿಗೆ 12.00 ಹೆಕ್ಟೇರ್ ಭೂಮಿಯನ್ನು ಉಚಿತ ಗೋಮಾಳಕ್ಕಾಗಿ ಕಾಯ್ದಿರಿಸಿ, ಉಳಿಕೆ ಲಭ್ಯವಾಗುವ ಜಮೀನು ಪ್ರಾಪ್ತಿಯಾದಲ್ಲಿ ನಮೂನೆ-57 ರ ಅರ್ಜಿಗಳನ್ನು ಸದರಿ ಸಮಿತಿಯು ಸಭೆ ಸೇರಿ ಬಾಕಿ ಇರುವ ಅರ್ಜಿಗಳನ್ನು ನಿಯಾಮಾನುಸಾರ ಪರಿಶೀಲಿಸಿ ಇತ್ಯರ್ಥಗೊಳಿಸಬೇಕಾಗಿರುತ್ತದೆ. |

ಸಂಖ್ಯೆ: ಆರ್‌ಡಿ 136 ಎಲ್‌ಜಿಕ್ಯೂ 2022 (ಇ)

(ಆರ್.ಅಶೋಕ)
ಕಂದಾಯ ಸಚಿವರು